# ಕರ್ನಾಟಕ ಪ್ರಾದೇಶಿಕ ಸಮಾಜ ಶಿಕ್ಷಣ ಸಮಿತಿಯವರ ಪ್ರಕಟನೆಗಳು.

೧ ಆತ್ಮೋದ್ಧಾರ

೨ ಗ್ರಾಮೋದ್ಧಾರ ಪದಗಳು

೩ ಲಾವಣಿ ಪದಗಳ ಸಂಗ್ರಹ

೪ ಪೌರನೀತಿಯ 'ಅ ಆ'

೫ ಹಿರಿಮೆಯ ಮಂತ್ರ ಅರ್ಥಾತ್ ಸ್ವಚ್ಛತೆ

೬ ಶಿಶು ಸಂಗೋಪನ ಹಾಗೂ ಪ್ರಥಮ ಚಿಕಿತ್ಸೆ

೭ ಅಂದಚಂದ

೮ ಬಸವಣ್ಣನವರು

೯ ಅಕ್ಕಮಹಾದೇವಿ

# ಮೊದಲ ನುಡಿ

ಇದೀಗ ಸ್ವತಂತ್ರವಾದ ನಮ್ಮ ಭಾರತವು ವಿವಿಧ ರೀತಿಯಿಂದ ಸಂಪನ್ನವಾಗಬೇಕೆಂಬುದೇ ನಮ್ಮೆಲ್ಲರ ಹಿರಿಯಾಸೆ. ಆ ಗುರಿಯ ದಾರಿಯಲ್ಲಿ ನಾವಿಂದು ಮುಂದುವರಿಯುವದು ಅತ್ಯಂತ ಅವಶ್ಯವಾಗಿದೆ. ಅದಕ್ಕಾಗಿ ಪ್ರಜಾಪ್ರಭುತ್ವದ ರಾಜಕೀಯ ಜೀವನ ವಿಧಾನವನ್ನು ಅಂಗೀಕರಿಸಿ ಅದನ್ನು ತುಂಬಾ ಯಶಸ್ವಿಗೊಳಿಸಲು ಬದ್ಧಕಂಕಣರಾಗಿ ಸಾಗಿದ್ದೇವೆ. ಅದರ ಸಿದ್ಧತೆಗಾಗಿ ನಾಡಿನಲ್ಲಿ ಯಥಾ ಜಾಗ್ರತಿಯುಂಟಾಗುವಂತಹ ವಿಧಾಯಕ ಕಾರ್ಯಕ್ರಮಗಳನ್ನು ಇಟ್ಟುಕೊಳ್ಳಲಾಗಿದೆ. ಅದರಿಂದಾಗಿ ಸ್ವಾತಂತ್ರ್ಯ ಸವಲತ್ತುಗಳು ಜನ ಸಾಮಾನ್ಯರ ನಿತ್ಯ ಜೀವನದಲ್ಲಿ ರೂಪುಗೊಳ್ಳುವಂತೆ ಸರ್ವೋದಯ ಸಮಾಜದ ಪುನರ್ಘಟನೆಯ ಶುಭಾಶಯಗಳು ಕಾರ್ಯಗತವಾಗಲು ಯತ್ನಗಳು ಅವ್ಯಾಹತವಾಗಿ ನಡೆದಿವೆ. ಅಂಥ ಪ್ರಯತ್ನಗಳಲ್ಲಿ ಸಮಾಜ ಶಿಕ್ಷಣದ ಯೋಜನೆಯೂ ಒಂದು.

ಹಳ್ಳಿಯ ನಿರಕ್ಷರಿಗಳಾದ ಅರ್ಧದ ಬಹುಜನ ಸಮಾಜ ಬಾಂಧವರಲ್ಲಿ ಪ್ರಜಾ-ಪ್ರಭುತ್ವದ ಹಕ್ಕು-ಹೊಣೆಗಳ ಸಮಯೋಚಿತವಾದ ತಿಳುವಳಿಕೆ ನಡೆವಳಿಕೆಗಳು ರಕ್ತಗತವಾಗಿ ಮೂಡಿ ಬರುವಂತೆ ಈ ಸಮಾಜ ಶಿಕ್ಷಣದ ಕಾರ್ಯವು ನಮ್ಮದೇ ಆದ ಪ್ರಜಾ ಸರಕಾರದವರ ನೆರವಿನಿಂದ ಜನ ಸಾಮಾನ್ಯರ ಸಹಕಾರದಿಂದ ಮುಂದೊರೆಯುತ್ತಿರುವದು ಸಂತೋಷದ ಸಂಗತಿ. ಅದರ ಫಲವಾಗಿ ಇದೀಗ ಕಲಿತು ಬರುವ ವಯಸ್ಕರ ಶಿಕ್ಷಣದ ಅಭಿವೃದ್ಧಿಗೆ ತಕ್ಕ ಏರ್ಪಾಡು ನಡೆಯುವದು ಅನಿವಾರ್ಯ. ಅವರ ಅಭಿರುಚಿ-ಆಸಕ್ತಿಗಳಿಗನುಸಾರವಾಗಿ, ಅವರ ಆರ್ಥಿಕ ಸಾಮಾಜಿಕ ಸ್ಥಿತಿ ಗತಿಗಳಿಗನುಗುಣವಾಗಿ ಅವರಿಗಾಗಿಯೇ ಪೂರೈಸಲಾಗಿರುವಂತಹ ಸಮಾಜ ಶಿಕ್ಷಣಕ್ಕೆ ಪೋಷಕವಾದ ವಿವಿಧ ಸಾಹಿತ್ಯದ ಬೆಳೆಯನ್ನು ಇದೀಗ ಹುಲುಸಾಗಿ ಬೆಳೆಯುವದು ಅತ್ಯಂತ ಅವಶ್ಯವೆಂದು ಬೇರೆ ಹೇಳಬೇಕಾಗಿಲ್ಲ. ಈ ದಿಶೆಯಲ್ಲಿ ನಮ್ಮ ಸಮಾಜದ ನಾಯಕರೂ, ಕಾರ್ಯಕರ್ತರೂ, ಶಿಕ್ಷಕರೂ ಸಾಹಿತಿಗಳೂ, ಉಳಿದ ಎಲ್ಲರೂ ತಮ್ಮ ಪಾಲಿನ ಹೊಣೆಯನ್ನು ನಿರ್ವಹಿಸುವದು ಇದೀಗ ಪವಿತ್ರವಾದ ಕರ್ತವ್ಯವಾಗಿದೆ.

ಈ ವಿಚಾರವನ್ನು ಮನಗಂಡು ನಮ್ಮ ಕರ್ನಾಟಕದ ಪ್ರಾದೇಶಿಕ ಸಮಾಜ ಶಿಕ್ಷಣ ಸಮಿತಿ ಬೆಳಗಾಂವಿ, ಅವರು ಸಮಯೋಚಿತವಾಗಿ ಸಮಾಜ ಶಿಕ್ಷಣದ ಸಾಹಿತ್ಯವನ್ನು ನಿರ್ಮಿಸುವ ಯೋಜನೆಯನ್ನು ಕೈಕೊಂಡು ಚಿಕ್ಕ ಹೊತ್ತಿಗೆಗಳನ್ನು ಪ್ರಕಟಿಸುತ್ತಿರುವದು ಅತ್ಯಂತ ಅಭಿನಂದನೀಯವಾಗಿದೆ. ಅಂಥ ಪ್ರಕಟಣೆಗಳಲ್ಲಿ ' ಬಸವಣ್ಣನವರು ' ಮತ್ತು ' ಅಕ್ಕಮಹಾದೇವಿ ' ಎಂಬವು ಇದೇ ಬಸವಜಯಂತಿಯ ಶುಭ ಸಂದರ್ಭದಲ್ಲಿ ಬೆಳಕು ಕಾಣುತ್ತಿರುವದು ಸತ್ಯ.

ಈ ಚಿಕ್ಕ ಹೊತ್ತಿಗೆಗಳನ್ನು ಬರೆದವರು ಶ್ರೀ. ಈಶ್ವರ ಎಂಬವರು; ವಿಜಾಪೂರ ಜಿಲ್ಲೆಗೆ ಸೇರಿದ ಬಬಲೇಶ್ವರದವರು. ಅವರು ಅನುಭವಿಕರಾದ ಸಮಾಜ ಶಿಕ್ಷಣದ ಕಾರ್ಯಕರ್ತರೂ, ಶಿಕ್ಷಕರೂ, ಆಗಿದ್ದು ಅವರಿಂದ ಬರೆಯಲಾದ ಈ ಚಿಕ್ಕ ಹೊತ್ತಿಗೆಗಳು ನೂತನವಾಗಿ ಸಾಕ್ಷರಿಗಳಾದ ವಯಸ್ಕರಿಗೂ, ಶಿಕ್ಷಕರಿಗೂ, ಕಾರ್ಯಕರ್ತರಿಗೂ ಅತ್ಯಂತ ಉಪಯುಕ್ತವಾದ ರೀತಿಯಿಂದ ಬರೆದವುಗಳಾಗಿವೆ. ವಿಶ್ವಪ್ರೇಮಿಗಳಾದ ಧರ್ಮಭಂಡಾರಿಗಳಾದ, ಯುಗ ಪ್ರವೃತ್ತಕರಾದ, ಕನ್ನಡ ಕುಲೋದ್ಧಾರಕರಾದ ಕಲ್ಯಾಣ ಬಸವಣ್ಣನವರ ಸಂಕ್ಷಿಪ್ತ ಚರಿತ್ರೆಯು ಹಿತವಾದ ಮಿತವಾದ ಸರಳ ಶೈಲಿಯಲ್ಲಿ ಬರೆಯಲಾಗಿದೆ. ಕಥಾ ಸರಣಿ ಆಕರ್ಷಕವಾಗಿದೆ. ಭಾಷೆ ಸುಲಭವಾಗಿದ್ದು ರುಚಿಯಾಗಿದೆ. ಬಸವಣ್ಣನವರ ಬಾಳಬಳ್ಳಿಯು ಅವರದೇ ಆದ ವಚನಗಳ ಹಂದರದ ಮೇಲೆ ಹಬ್ಬಿ ಹಸುರೇರಿ ಕಳೆಗಟ್ಟುವಂತೆ ಬಹು ಸುಂದರವಾಗಿ ದಕ್ಷತೆಯಿಂದ ಚಿತ್ರಿಸಲಾಗಿದೆ. ಆದುದರಿಂದ ಇದು [illegible]ರಿಗೆ ಆನಂದವನ್ನು ನೀಡಿ ಅವರ ನಡೆನುಡಿ, ರೀತಿ ನೀತಿಗಳ ವಿಕಾಸಕ್ಕೆ ನೆರವಾಗುವದೆಂದು ಧೈರ್ಯವಾಗಿ ಹೇಳಬಹುದು. ಹಾಗೆಯೇ ಅಕ್ಕಮಹಾದೇವಿಯ ಜೀವನ ಚರಿತ್ರೆಯೂ ಒಳ್ಳೇ ಹೃದಯಂಗಮವಾದ ಶೈಲಿಯಲ್ಲಿ ಹೆಣೆಯಲಾಗಿದೆ. ಪುಣ್ಯವೇ ಹೆಣ್ಣು ದೇವತೆಯಾದ ಮಹಾದೇವಿಯಕ್ಕನ ಬಾಳು ನೀತಿಯು ಸಿರಿಯಾಗಿದೆ. ಇವರೀರ್ವರು ಅಂದಿನ ಆ ಸುಸಂಸ್ಕೃತವಾದ ಸಮಾಜಕ್ಕೆ ಆದರ್ಶವಾದ 'ಅಣ್ಣ' 'ಅಕ್ಕ' ಎನಿಸಿ ಬಾಳಿ ನೆಲದ ಮಕ್ಕಳಿಗೆ ಮಾರ್ಗದರ್ಶನ ಮಾಡಿ ಹೋದರು. ಅವರ ಬಾಳು ನಮಗಿಂದು ಬೆಳಕಾಗಿ ನಿಂತಿದೆ. ಆ ಬೆಳಕಿನಲ್ಲಿ ನಾವಿಂದು ದಾರಿಯನ್ನು ಕಂಡುಕೊಂಡು ಮುಂದೆ ಸಾಗೋಣ.

ಈ ಹೊತ್ತಿಗೆಗಳನ್ನು ಸಮಾಜ ಶಿಕ್ಷಣದ ಪ್ರೇಮಿಗಳಾದ ಎಲ್ಲರೂ ಅಭಿಮಾನದಿಂದ ಬರಮಾಡಿಕೊಳ್ಳುವರೆಂದು ಆಶಿಸುವೆ. ಸಮಾಜ ಶಿಕ್ಷಣ ಸಾಹಿತ್ಯ ನಿರ್ಮಾಣದ ಈ ಉದಾತ್ತ ಕಾರ್ಯದಲ್ಲಿ ಮುಂದಡಿಯಲ್ಲಿ ಶ್ರೀ. ಈಶ್ವರರವರು ಅಭಿನಂದನಾರ್ಹರು. ಅಲ್ಲದೆ ಈ ಸಾಹಿತ್ಯ ಪ್ರಕಟನೆಯ ಹೊಣೆಯನ್ನು ಹೊತ್ತು ಕಾರ್ಯರಂಗಕ್ಕಿಳಿದ ಕರ್ನಾಟಕ ಪ್ರಾದೇಶಿಕ ಸಮಾಜ ಶಿಕ್ಷಣ ಸಮಿತಿಯವರಿಗೆ ನನ್ನ ಹೃತ್ಪೂರ್ವಕವಾದ ಅಭಿನಂದನೆಗಳು.

ಬೆಳಗಾವಿ ಬಸವಜಯಂತಿ
೧೫-೫-೧೯೫೯

ಎಸ್. ಡಿ. ಇಂಚಲ,
ಪ್ರಿನ್ಸಿಪಾಲರು, ಜಗದ್ಗುರು ಗುರುಸಿದ್ಧೇಶ್ವರ ಕನ್ನಡ ಟ್ರೇನಿಂಗ ಕಾಲೇಜ
ಹುಬ್ಬಳ್ಳಿ. ಮತ್ತು ಕ. ಪ್ರಾ. ಸ.
ಶಿಕ್ಷಣ ಸಮಿತಿ ಸದಸ್ಯರು.

# ಅಕ್ಕಮಹಾದೇವಿ

## ೧

ಕನ್ನಡ ನಾಡಿನ ಪುಣ್ಯ ಭೂಮಿಯಲ್ಲಿ ಬಹುಜನ ಪುಣ್ಯ ಪುರುಷರು ಜನಿಸಿದರು. ಆ ಮಹಾಪುರುಷರ ಮಹಿಮೆಯಿಂದಲೂ, ಅವರ ಪವಿತ್ರವಾದ ಜೀವನದಿಂದಲೂ ನಮ್ಮ ನಾಡಿನ ಹಿರಿಮೆ ಹೆಚ್ಚಿದೆ. ಇಂಥ ಆದರ್ಶ ಪುರುಷರಲ್ಲಿ ಹೆಣ್ಣು ಮಕ್ಕಳೂ ಇರುವರು. ಅವರೆಲ್ಲರು ಮರೆಯಾಗಿ ಶತಮಾನಗಳು ಉರುಳಿ ಹೋಗಿವೆ. ಅವರು ಮರೆಯಾದರೂ ಅವರ ಆಚಾರ-ವಿಚಾರ, ನಡೆ-ನಡಾವಳಿ, ಅವರು ಸಾಧಿಸಿದ ಆದರ್ಶಗಳೂ ಇಂದಿಗೂ ನಮ್ಮ ಮುಂದೆ ಸಜೀವವಾಗಿ ನಿಂತಿವೆ. ಅವರ ಜೀವನದಲ್ಲಿಯ ತಿಳಿಯಾದ ವಿಚಾರಗಳು ಮಾನವ ಕೋಟಿಯ ಸುಖದ ಸೋಪಾನಗಳಾಗಿ ನಿಂತಿವೆ. ನಮ್ಮ ನಾಡಿನಲ್ಲಿ ಜನಿಸಿ-ಬೆಳೆದು, ನಾಡನ್ನು, ನುಡಿಯನ್ನು ಪಾವನ ಮಾಡಿದ ಮಹಾಪುರುಷರ ಮನೋವಿಚಾರಗಳನ್ನು ಪ್ರೀತಿಯಿಂದ ನಾವು ತಿಳಿದುಕೊಳ್ಳುವದು ಅವಶ್ಯಕವಿದೆ.

ಹನ್ನೆರಡನೆಯ ಶತಮಾನದ ಕಾಲ. ಅಂದರೆ ಸುಮಾರು ಏಳು ನೂರು ವರುಷಗಳಾಚೆ ಕನ್ನಡ ನಾಡಿನಲ್ಲಿ ದೊಡ್ಡ ಧಾರ್ಮಿಕ ಚಳುವಳಿ ಆಯಿತು. ಆ ಕಾಲದಲ್ಲಿ ಅನೇಕ ಮಹಾಪುರುಷರು ಮಾನವ ಕೋಟಿಯ ಕಲ್ಯಾಣ ಮಾಡಲು ಹುಟ್ಟಿ ಬಂದರು. ಅಂಥವರಲ್ಲಿ ಒಬ್ಬಳಾದ 'ಅಕ್ಕಮಹಾದೇವಿ'ಯ ಪುಣ್ಯಮಯ ಜೀವನವನ್ನು ನಾವು ತಿಳಿದುಕೊಳ್ಳುವಾ. ಅಕ್ಕಮಹಾದೇವಿ ಅಂದರೆ ಕನ್ನಡ ನಾಡಿನ ಜನಗಳೆಲ್ಲರ ಅಕ್ಕ ಅಂತಹ ಹಿರಿಯತನ ಅವಳದಿದೆ. ಅವಳ ತಾಯಿ ತಂದೆ, ಹುಟ್ಟು ಮೆಟ್ಟು, ಅವಳ ಸಾಧನೆಯ ಹೋರಾಟಗಳನ್ನು ತಾಳ್ಮೆಯಿಂದ, ಭಕ್ತಿಯಿಂದ ಅರಿತುಕೊಳ್ಳುವದು ಅವಳ ತಮ್ಮಂದಿರೆಲ್ಲರ ಪವಿತ್ರ ಕೆಲಸವಾಗಿದೆ.

ಈಗ ಮೈಸೂರು ಸೀಮೆಯಲ್ಲಿರುವ ಉಡುತಡಿ ಎಂಬ ಊರಿನಲ್ಲಿ ಅಕ್ಕಮಹಾದೇವಿ ಜನಿಸಿದಳು. ಉಡುತಡಿ ಗ್ರಾಮವು ಪ್ರಕೃತಿ ಸೌಂದರ್ಯದಿಂದಲೂ, ಸುಶೀಲ ಜನಗಳಿಂದಲೂ ಶೋಭಾಯಮಾನವಾಗಿತ್ತು. ಆ ಊರಿಗೆ ಒಡೆಯನಾಗಿದ್ದನು ಕೌಶಿಕನೆಂಬ ರಾಜ. ಉಡುತಡಿ ಗ್ರಾಮದಲ್ಲಿ ನಿರ್ಮಲನೆಂಬ ಶಿವಶರಣನೊಬ್ಬನಿದ್ದನು. ಅವನಿಗೆ ಅನುರೂಪಳಾದ ಶಿವಶರಣೆಯೊಬ್ಬಳು ಹೆಂಡತಿಯಾಗಿದ್ದಳು. ಅವಳ ಹೆಸರು ಸುಮತಿ. ಗಂಡ ಹೆಂಡತಿಬ್ಬರೂ ಬಹು ಸುಖದಿಂದ ಇದ್ದರು. ಒಳ್ಳೆಯ ವಿಚಾರವಂತರಾದ ಗಂಡ ಹೆಂಡರನ್ನು ಕಂಡು ಯಾರು ತಾನೇ ಪ್ರೀತಿ ಮಾಡಲಾರರು ? ಉಡುತಡಿ ಗ್ರಾಮದ ಜನರೆಲ್ಲರೂ ನಿರ್ಮಲ ಸುಮತಿಯರನ್ನು ಗೌರವದಿಂದ ಕಾಣುತ್ತಿದ್ದರು. ನಿರ್ಮಲನು ಹೆಸರಿಗೆ ತಕ್ಕಂತೆ ಸ್ವಚ್ಛವಾದ ಮನಸ್ಸಿನವನಾಗಿದ್ದನು. ಅವನ ಹೆಂಡತಿಯಾದ ಸುಮತಿಯಾದರೂ ಹೆಸರಿಗೆ ಅನುಗುಣವಾಗಿ ಒಳ್ಳೆಯ ಗುಣದಿಂದಲೂ, ಸತ್ಯತನದಿಂದಲೂ ಗ್ರಾಮದ ನಾರಿಯರೆಲ್ಲರ ಪ್ರೀತಿಗೆ ಪಾತ್ರಳಾಗಿದ್ದಳು. ಹೀಗಿರುವಾಗ ಅವರಿಗೆ ಯಾವ ಚಿಂತೆ ಇರದಿದ್ದರೂ ಒಂದು ದೊಡ್ಡ ಕೊರತೆ ಇತ್ತು. ಅದಕ್ಕಾಗಿ ಗಂಡ ಹೆಂಡರಿಬ್ಬರೂ ಮನದಲ್ಲೇ ಮರಮರನೆ ಮರುಗುತ್ತಿದ್ದರು. ಅವರ ಮರುಗಿನ ಚಿಂತೆ ಯಾವುದೆಂದರೆ ಅವರಿಗೆ ಮಕ್ಕಳಿಲ್ಲದಿರುವದು. ಅವರ ಬಾಳಿನ ಬೆಳಕಾಗಲು, ಅವರ ಪ್ರೇಮದ ಪತಾಕೆಯಾಗಲು ಅವರಿಗೆ ಸಂತಾನ ಬೇಡವೇ ? ಮಕ್ಕಳಿಲ್ಲದ ಮಾನವನ ಬಾಳು ಏತರ ಬಾಳು? ‘ ಮಕ್ಕಳಿದ್ದರೆ ಮನೆ ಚೆಂದ ’ ವೆಂದು ಗರತಿಯರು ಹಾಡುವದಿಲ್ಲವೇ ? ಮಕ್ಕಳಿಲ್ಲದ ದಂಪತಿಗಳು ಚಿಂತಿಸುವಂತೆ ಚಿಂತಿಸಿ, ಮಕ್ಕಳನ್ನು ಪಡೆಯಲು ನಿರ್ಮಲ-ಸುಮತಿಯವರು ವಿವಿಧ ರೀತಿಯಿಂದ ನಿಯಮಗಳನ್ನು ಪಾಲಿಸುತ್ತಲಿದ್ದರು.

ನಿರ್ಮಲ-ಸುಮತಿಯರು ಶಿವಭಕ್ತರು. ಕಾರಣ ಅವರು ಶಿವ ಪಾರ್ವತಿಯರಿಗೆ ಹರಕೆ ಹೊತ್ತು, ದಿನವೂ ಪೂಜೆ, ಭಜನೆ ಮಾಡಿ

‘ಮಕ್ಕಳನ್ನು ಕರುಣಿಸು ದೇವರೇ ! ?’ ಎಂದು ಬೇಡಿಕೊಳ್ಳುತ್ತಿದ್ದರು. ಈ ರೀತಿಯಿಂದ ಪತಿ ಪತ್ನಿಯರಿಬ್ಬರೂ ಒಂದೇ ಮನಸ್ಸಿನಿಂದಲೂ, ಶುದ್ಧವಾದ ಭಕ್ತಿಯಿಂದಲೂ ಪರಮಾತ್ಮ-ಪಾರ್ವತಿಯರನ್ನು ಪೂಜಿಸುತ್ತಿರುವಾಗ ಸುಮತಿಯು ಬಸುರಿಯಾದಳು. ಮಹದೇವನ ಹಾಗೂ ಮಹಾದೇವನ ಕರುಣೆಯಿಂದ ತಮ್ಮ ಬಾಳಿನ ಬೆಳಕು ಉದಯಿಸುವಂತಾಯಿತೆಂದು ಅವರಿಬ್ಬರೂ ಹರುಷಭರಿತರಾದರು. ದಿನ ದಿನಗಳು ಉರುಳಿದಂತೆ ಸುಮತಿದೇವಿಯು ಅಂಗ ಸೌಂದರ್ಯ ಹೆಚ್ಚಾಗುತ್ತ, ನವಮಾಸಗಳು ತುಂಬಿದ ಬಳಿಕ ಒಂಭತ್ತನೆಯ ದಿವಸ ಸುಮತಿದೇವಿಯು ಹೆಣ್ಣು ಕೂಸನ್ನು ಹಡೆದಳು.

ಜನಿಸಿದ ಕೂಸು ಬಹಳ ಚೆಂದವಾಗಿತ್ತು. ಕೂಸಿನ ಮುಖ ಲಕ್ಷಣ, ಸ್ಪ್ರಾಂಪ ಬಣ್ಣ, ಹೊಳೆಯುವ ಕಣ್ಣು, ಕೆಂಪಾದ ತುಟಿ, ದುಂಡಾದ ಮುಖ ಕಮಲ ಕಂಡು ಕಂಡು ತಾಯಿ ತಂದೆಗಳಿಬ್ಬರೂ ಬಹಳ ಹಿಗ್ಗಿದರು. ಕೂಸಿನ ನಾಮಕರಣ ಮಾಡುವಾಗ ಗಂಡ ಹೆಂಡತಿಯರಿಬ್ಬರೂ ಬಹಳ ವಿಚಾರ ಮಾಡಿದರು.

ಮಹಾದೇವನ ಹೆಂಡತಿಯಾದ ಮಹಾದೇವಿಯ ಕರುಣೆಯಿಂದ ತಮಗೆ ಹೆಣ್ಣು ಮಗು ಹುಟ್ಟಿದ ಮೂಲಕ ಅವರು ಸಂತೋಷ ಹಾಗೂ ಭಕ್ತಿಯಿಂದ ‘ಅಕ್ಕ ಮಹಾದೇವಿ’ ಎಂಬ ಅಕ್ಕರೆಯ ಹೆಸರನ್ನು ಗೊತ್ತು ಮಾಡಿ ಮಗುವನ್ನು ಮುದ್ದಾಡಿದರು. ಉಡುತಡಿ ಊರಿನ ತಾಯಂದಿರು ಸಣ್ಣ ಹುಡುಗಿಯರು ಬಂಧು ಬಳಗದವರು ಎಲ್ಲರೂ ಸುಮತಿಯ ಮಗಳಿಗೆ ‘ಅಕ್ಕಮಹಾದೇವಿ’ ಎಂಬ ಅಕ್ಕರೆಯ ಹೆಸರಿಟ್ಟು ಜೋಗುಳದ ಪದ ಹಾಡಿ ನಲಿದರು ! ಕೂಸಿನ ರೂಪಿಗೆ, ಎಳೆಯ ನಗೆಗೆ, ಹೊಳೆಯುವ ಕಣ್ಣುಗಳ ಕಾಂತಿಗೆ ಮೆಚ್ಚಿದ ಹೆಣ್ಣು ಮಕ್ಕಳು ತಮ್ಮ ತಮ್ಮ ಮನದ ಸಂತೋಷವನ್ನು ಸುಮತಿಗೆ ಹೇಳಿದರು. ಒಬ್ಬಳು;

“ ಮುತ್ತಿನಂತಹ ಮಗಳನ್ನು ಹಡೆದ ನೀನೇ ಧನ್ಯಳು !
ಎಂದಳು ಮತ್ತೊಬ್ಬಳು.
“ ಬಡವರ ಮನೆಯಲ್ಲಿ ಇಂಥ ಭಾಗ್ಯರತ್ನ ಹುಟ್ಟಿತಲ್ಲಾ ! ”
ಎಂದಳು ಮಗುದೊಬ್ಬಳು.
“ ಶಿವನ ಮಹಿಮೆಯಿಂದ ಹುಟ್ಟಿದ ಈ ಕೂಸು ನರರಿಗೆ ಸಲ್ಲದು ! ” ಎಂದಳು.

ಅಕ್ಕ ಪಕ್ಕದ ನಾರಿಯರ ನೆಚ್ಚಿನ ಮಾತು ಕೇಳಿ ಸಂತೋಷಗೊಂಡ ಸುಮತಿಯು ಕೂಸಿಗೆ ದೃಷ್ಟಿಯಾದೀತೆಂದು ಚಿಂತಿಸಿ ಕೂಡಲೆ ಶಿವನನ್ನು ಭಜಿಸಿ, ಕೈಮುಗಿದು ಬೇಡಿಕೊಂಡಳು. ಬಹಳ ದಿನಗಳ ನಂತರ ಮುಪ್ಪಿನ ಕಾಲದ ಸಮಯದಲ್ಲಿ ಹುಟ್ಟಿದ ಮುತ್ತಿನಂತಹ ಮಗುವನ್ನು ( ತಡವಾಗಿ ಹಡೆದ ತಾಯಂದಿರು ) ಬಹಳ ಅಕ್ಕರೆ ಮಾಡುವ ಹಾಗೆ ಸುಮತಿಯೂ ಕೂಸು ಅಕ್ಕಮಹಾದೇವಿಯನ್ನು ಅಕ್ಕರೆ ಮಾಡಿ ಅತಿ ಆನಂದದಿಂದ ತಿನಿಸಿ-ಉಣಿಸಿ ಬೆಳೆಸಿದಳು.

೨

ತನ್ನ ಎಳನೆಯ ವಯಸ್ಸಿನಲ್ಲಿ ಅಕ್ಕಮಹಾದೇವಿಯು ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಬಲ್ಲವಳಾದಳು. ಮಗಳ ಜಾಣತನ ಕಂಡು ತಾಯಿ-ತಂದೆಗಳಿಗೆ ತುಂಬಾ ಹರುಷ. ಮಗಳು ಮಂದಿಯ ಮಕ್ಕಳಂತೆ ಉಡಿಗೆ-ತೊಡಿಗೆ-ತಿನಿಸು ಉಣಿಸುಗಳನ್ನು ಕಾಡಿ ಬೇಡದೆ ಯಾವಾಗಲೂ ಶಿವಧ್ಯಾನ, ಶಿವಪೂಜೆಗಳಲ್ಲಿ ಕಾಲ ಕಳೆಯುವದನ್ನು ಕಂಡು ನಿರ್ಮಲ ಸುಮತಿಯರು ಒಳಗೊಳಗೆ ಚಿಂತೆ ಮಾಡದೆ ಇರಲಿಲ್ಲ ! ಅಕ್ಕನು ಎಳೆತನದಲ್ಲಿ ಯಾವ ಹುಡಿಗಿಯರೊಂದಿಗಾಗಲೀ, ಗೆಳತಿಯರೊಂದಿಗಾಗಲೀ ಜಗಳವಾಡುತ್ತಿರಲಿಲ್ಲ. ಒಬ್ಬರಿಗೆ ಬಿರುಸು ಮಾತು ಆಡುತ್ತಿರಲಿಲ್ಲ. ಆಟ-ಪಾಟಗಳಲ್ಲಿ ತೊಡಗದೆ ಯಾವಾಗಲೂ ತನ್ನ ಪ್ರೀತಿಯ ದೇವನಾದ ಚೆನ್ನಮಲ್ಲಿಕಾರ್ಜುನನ ನೆನಪು ಮಾಡುತ್ತ,

ಅವನನ್ನು ಪ್ರಾರ್ಥಿಸುತ್ತ ಕಾಲ ಕಳೆಯುತ್ತಿದ್ದಳು. 'ಇಂಥ ಚಿಕ್ಕ ವಯಸ್ಸಿನಲ್ಲಿ ಇವಳು ಆಟ ಪಾಟವಾಡದೆ, ಊಟ ಬೇಡದೆ ಶಿವನ ಭಜನೆಯಲ್ಲಿ ಇರುವಳಲ್ಲಾ ? ' ಎಂದು ಅವಳ ಮಾತಾಪಿತೃಗಳು ಚಿಂತೆ ಮಾಡುತ್ತಿದ್ದರು.

ಅಕ್ಕನ ವಯಸ್ಸು ಹದಿನಾಲ್ಕು ತುಂಬಿದಾಗ, ಅವಳ ದೇಹ ಸೌಂದರ್ಯ ಬೆಳೆಯಿತು. ದೇಹದ ಚಂದದೊಂದಿಗೆ ಅವಳ ಪೂಜೆ ಪುನಸ್ಕಾರ, ಧ್ಯಾನ ವೈರಾಗ್ಯಗಳೂ ಬೆಳೆಯತೊಡಗಿದವು. ಧ್ಯಾನದಲ್ಲಿ ಪ್ರಮುದಿತ ಅಕ್ಕನು ಸಂಸಾರ ಬಂಧನದಿಂದ ಪಾರು ಮಾಡಲು ಚೆನ್ನಮಲ್ಲಿಕಾರ್ಜುನನನ್ನು ಬೇಡಿಕೊಳ್ಳುತ್ತಿದ್ದಳು;

" ಸಂಸಾರ ಬೆಂಬಿಡದೆ ಕಾಡುತಿದೆಯಯ್ಯಾ !
ಏನೇನೆಂದೆನಯ್ಯಾ !
ಬಂದಂದಿನ ದಂದುಗಕ್ಕೆ ಏನೇನೆಂದೆನಯ್ಯಾ !
ಬೆಂದ ಒಡಲ ಕೆಡಿಸುವಲ್ಲಿ ನಾನಾರೆ ?
ಚೆನ್ನಮಲ್ಲಿಕಾರ್ಜುನಯ್ಯಾ, ಕೊಲ್ಲು, ಕಾಯಿ, ನಿಮ್ಮ ಧರ್ಮ! "

ಅಕ್ಕನ ಮನದ ಹಂಬಲವನ್ನು ಕೇಳಿದ ತಾಯಿ ಸುಮತಿಯು ಏನೂ ತಿಳಿಯದಂತಾಗಿ ಕಳವಳಗೊಂಡು ಚಿಂತಿಸಿದಳು ! ಮಗಳು ಸಂಸಾರದಿಂದ ಪಾರಾಗಲು ದೇವರಲ್ಲಿ ಬೇಡುವ ಪರಿಯನ್ನು ಕೇಳಿದ ತಾಯಿ ತಾನು ಮಗಳ ವಿಷಯದಲ್ಲಿ ಕಟ್ಟಿಕೊಂಡು ಕನಸನ್ನು ನೆನೆದು ದುಃಖಿಸಿದಳು. ಯೋಗ್ಯನಾದ ವರನಿಗೆ ಮಗಳನ್ನು ಕೊಟ್ಟು ಮದುವೆ ಮಾಡಿ, ಅವಳ ಸುಖಜೀವನವನ್ನು ಕಣ್ತುಂಬಾ ಕಂಡು ಹರುಷ ಪಡುವ ಬಯಕೆ ತಾಯಿಗೆ ! ಸಂಸಾರ ಪಾಶದಿಂದ ಬಿಡುಗಡೆಯಾಗಿ ದೇವನನ್ನು ಕಾಣುವ ಬಯಕೆ ಮಗಳಿಗೆ !

ಹೆಚ್ಚು ದಿನ ತಡೆದರೆ ಮಗಳು ಸಂಸಾರದಲ್ಲಿ ಸಿಲುಕದೆ ಸನ್ಯಾಸಿ ಯಾದಾಳೆಂಬ ಅಂಜಿಕೆಯಿಂದ ನಿರ್ಮಲ-ಸುಮತಿಯರು ಮಗಳ

ಮದುವೆ ಮಾಡಬೇಕೆಂದು ನಿರ್ಧರಿಸಿದರು. ಅಲ್ಲಲ್ಲಿ ಸಪ್ಪಕ್ಷರ ಮನೆಯಲ್ಲಿ ವರಗಳನ್ನು ನೋಡಬಯಸಿದರು.

ಒಂದು ದಿವಸ ಸುಮತಿಯು ಮಗಳಿಗೆ ತನ್ನ ಮನದ ಹಂಬಲ ಮತ್ತು ಇಚ್ಛೆಯನ್ನು ಹೇಳಿದಳು;

"ಮುದ್ದು ಮಹಾದೇವಿ, ಆದಷ್ಟು ಬೇಗನೆ ನಿನ್ನ ಮದುವೆ ಮಾಡಬೇಕೆಂದಿದ್ದೇವೆ ತಾಯಿ." ಎಂದಳು ಸುಮತಿ.
ತಾಯಿಯ ಮಾತಿಗೆ ಅಕ್ಕನು ನಸುನಕ್ಕಳು. ಅವಳ ನಗೆ ಮೊಗದಲ್ಲಿ ಚಿಂತೆಯೂ ಮೂಡಿತು.
"ಯಾಕೆ ತಾಯೀ, ಚಿಂತೆಯಾಕೆ? ನಿನ್ನ ಮದುವೆ ಅಂದರೆ ನಿನಗೆ ಸಂತೋಷವಲ್ಲೇನವ್ವಾ ?" ಎಂದಳು ತಾಯಿ.
"ಅವ್ವಾ, ನನ್ನ ಮದುವೆ ಆಗಿ ಹೋಗಿದೆಯಲ್ಲ !"
ಎಂದಳು ಅಕ್ಕಮಹಾದೇವಿ,
"ಆಂ ? ಇದೇನು ಮಗಳೇ ?"
"ಅಹುದವ್ವ, ನನ್ನ ಮದುವೆ ಆಗಿದೆ !"
"ಯಾವಾಗ......?"
"ನಾನು ಹುಟ್ಟಿದಾಗಲೇ !"
"ಯಾರೊಡನೆ ಮದುವೆಯಾದೆ ?"
"ಚೆನ್ನಮಲ್ಲಿಕಾರ್ಜುನ ದೇವನೊಡನೆ !"
"ಹೀಗೇಕೆ ಹುಚ್ಚಿಯಂತೆ ಮಾತಾಡುವಿ ಮಗಳೇ.......?"
"ಅಹುದವ್ವ ! .... ಅವನು ನನಗೆ ಹುಚ್ಚು ಹಿಡಿಸಿದ್ದಾನೆ !!"
"ಯಾರವನು ? ತೆಗೆದು ಹಾಕು ನಿನ್ನ ವಿಚಾರವನ್ನು !!"
ಎಂದು ತಾಯಿ ಸುಮತಿ ಮಗಳಿಗೆ ಬುದ್ಧಿವಾದ ಹೇಳಿದಳು.
ಆಗ ಅಕ್ಕನು ದುಃಖದಿಂದ;
"ಅವ್ವಾ, ನಾನೊಲಿದ ದೇವನು ಎಂಥವನು ನೀನು ಬಲ್ಲೆಯಾ ?

ಕೇಳು ತಾಯೀ....

ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವಂಗಾನು
ಒಲಿದೆನವ್ವಾ! ಎಡೆ ಇಲ್ಲದ, ಕಡೆ ಇಲ್ಲದ, ತೆರೆಹಿಲ್ಲದ,
ಕುರುಹಿಲ್ಲದ ಚೆಲುವಂಗಾನೊಲಿದೆ ಎಲೆ ಅವ್ವಾ!
ನೀನು ಕೇಳಾ ತಾಯೆ;
ಭವವಿಲ್ಲದ, ಭಯವಿಲ್ಲದ, ನಿರ್ಭಯ ಚೆಲುವಂಗೊಲಿದೆನಾನು!
ಕುಲಸೀಮೆ ಇಲ್ಲದ, ನಿಸ್ಸೀಮ ಚೆಲುವಂಗೆ ನಾನೊಲಿದೆ।
ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ!
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು”

ಎಂದು ಅಕ್ಕನು ತಾನು ಒಲಿದ ಗಂಡನಾದ ಚೆನ್ನಮಲ್ಲಿಕಾರ್ಜುನ ದೇವನ ನಿಜಸ್ಥಿತಿಯನ್ನು ಹೇಳಿದಳು. ಅವನ ಗುಣಗಾನ ಮಾಡಿ ಹಂಬಲಿಸಿ ಅತ್ತಳು! ಮಗಳ ಮಾತು ಕೇಳಿ ಸುಮತಿಯ ಎದೆ ಒಡೆದಂತಾಯಿತು! ಆಗ ಮಗಳಿಗೆ;

“ಅಯ್ಯೋ ಮಗಳೇ, ಇದೇನಮ್ಮಾ ಹೀಗೇಕೆ ಮಾಡುವೆ? ನಮ್ಮಂತಹ ನರರಿಗೆ ಆ ದೇವನು ಒಲಿಯುವನೇನು? ನಿನ್ನ ಹುಚ್ಚುತನವನ್ನು ಬಿಟ್ಟು, ನಮ್ಮ ಮರ್ಯಾದೆ ಉಳಿಸು ತಾಯಿ ಎಂದು ಕಣ್ಣೀರು ಸುರಿಸಿದಳು.

“ಅವ್ವಾಽ, ನಿಜವಾಗಿಯೂ ಚೆನ್ನಮಲ್ಲಿಕಾರ್ಜುನನು ನನಗೆ ಹುಚ್ಚು ಹಿಡಿಸಿದ್ದಾನೆ. ತಾಯಿ! ಅವ್ವಾಃ .... !” ಗೋಳೋ ಎಂದು ಅತ್ತಳು. ಅಕ್ಕ ಮಗಳ ದುಃಖ ಕಂಡು ತಾಯಿಯ ದುಃಖ ಇಮ್ಮಡಿಯಾಯಿತು! ಆಗ ಅಕ್ಕನು ಅಳುತ್ತ;

ಅವ್ವಾಽ

ಎನ್ನ ಮನವ ಮಾರುಗೊಂಡನವ್ವಾ!
ಎನ್ನ ತನುವ ಸೂರೆಗೊಂಡನವ್ವಾ!

ಎನ್ನ ಸುಖವ ನೊಪ್ಪುಗೊಂಡನವ್ವಾ !
ಎನ್ನಿರವ ನಿಂಬುಗೊಂಡನವ್ವಾ !
ಚೆನ್ನಮಲ್ಲಿಕಾರ್ಜುನನ ಒಲುಮೆಯವಳಾನು ? ”

ಎಂದು ತನ್ನ ದುಃಖ ತೋಡಿಕೊಂಡಳು ! ಮಗಳ ಮನದ ಕಳವಳವನ್ನು ಕಂಡು ತಾಯಿ ಸುಮತಿಗೆ ದಿಕ್ಕು ತೋರದಾಯಿತು ! ಕೊನೆಗೊಮ್ಮೆ ಕೇಳಿದಳು !

“ ಮಗಳೇ, ನೀನು ಹೀಗೆ ಮಾಡಿದರೆ ನಮ್ಮ ಗತಿಯೇನು ? ನೀನು ಒಬ್ಬರ ಮನೆಯ ಸೊಸೆಯಾಗಿ ಬಾಳಿದರೆ ನಮಗೆ ಸಂತೋಷ ವಾಗುವದು ! ದೇವನೇ ಗಂಡನೆಂದು ಹೀಗೆ ಅತ್ತರೆ ಜನರು ಏನೆಂದು ಕೊಂಡಾರು ? ” ಎಂದು ಕೇಳಿದಳು ಸುಮತಿ.

“ ಅವ್ವಾ, ಯಾರ ನಿಂದೆಗೂ ನಾನು ಕಿವಿಗೊಡಲಾರೆ ! ನನ್ನನ್ನು ಮರುಳುಗೊಳಿಸಿದ ದೇವನೇ ನಿಂದೆ ಮಾಡುವ ತೆಗಳಿಗರಿಗೆ ಉತ್ತರ ಕೊಡುವನು ! ” ಎಂದು ನುಡಿದಳು ಅಕ್ಕ. ಮಗಳ ಮಾತಿಗೆ ತಾಯಿಯ ಹೃದಯ ಕರಗಿತು !

೩

ಅಕ್ಕನ ವೈರಾಗ್ಯ ಜೀವನವನ್ನು ಕಂಡು ಸುಮತಿ ನಿರ್ಮಲರು ಮರಗುತ್ತ ಅಳುತ್ತಿರುವಾಗ, ಸಮಾಜದಲ್ಲಿಯ ಅತ್ಯಾಚಾರ, ಅನಾಚಾರ, ಹಿಂಸಾ ಕೃತಿಗಳನ್ನು ಕಂಡು ಅಕ್ಕನು ಮರಗುತ್ತಿದ್ದಳು. ಅಕ್ಕನ ನೆರೆಮನೆಯಲ್ಲಿ ಜಾಲಗಾರನೊಬ್ಬನಿದ್ದ. ಅವನು ಹಿಂಸೆ ಮಾಡಿ ತನ್ನ ಹೊಟ್ಟೆ ತುಂಬಿಕೊಳ್ಳುತ್ತಿದ್ದ. ಹಿಂಸೆ ಮಾಡುವಾಗ ಅವನಿಗೆ ಹೇಸಿಕೆಯಾಗಲೀ, ಕನಿಕರವಾಗಲೀ ಉಂಟಾಗುತ್ತಿರಲಿಲ್ಲ ! ಒಂದು ದಿವಸ ಅವನ ಮಗುವೊಂದು ಮೃತವಾಯಿತು. ಆಗ ಆ ಜಾಲಗಾರನು ಬೋರಾಡಿ ಅಳಹತ್ತಿದ. ಅದನ್ನು ಕಂಡು ಅಕ್ಕನು;

ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ,
ಹಲವು ಪ್ರಾಣಿಯ ಕೊಂದು ನಲಿ ನಲಿದಾಡುವ !

ತನ್ನ ಮನೆಯುಳೊಂದು ಶಿಶು ಸತ್ತಡೆ,
ಅವಕೆ ಮರುಗುವಂತೆ ಅವಕೇಕೆ ಮರುಗವು ?
ಜಾಲಗಾರನ ಮಾಯೆ ಜಗಕೆಲ್ಲ ನಗೆಗೆಡೆ !"

ಒಂದೆ ಮಾರ್ಗದಿಂ ತನ್ನ ಜೀವನವನ್ನು ಸಾಗಿಸುವ ಜಾಲಗಾರನ ಕೀಳು ಬಾಳುವೆ ಅಕ್ಕನಿಗೆ ಸರಿ ಕಾಣಲಿಲ್ಲ ! ಸಮಾಜದಲ್ಲಿಯ ಮೇಲು ಕೀಳು ಭಾವನೆ, ಒಂದಾನೊಂದು ಆಚಾರವನ್ನು ಖಂಡಿಸಿ ಜನತೆಗೆ ತೀವ್ರ ಹೇಳಿದಳು ಅಕ್ಕ.

ಅಕ್ಕನು ಮನೆ ಬಿಟ್ಟು ಹೊರಗೆ ಕಾಲಿಟ್ಟಿದ್ದರೂ ಸಮಾಜದಲ್ಲಿಯ ಅನ್ಯಾಯ ಅವಳಿಗೆ ಕಾಣದೆ ಇರಲಿಲ್ಲ ! ಅನ್ಯಾಯವೆನಿಸುವದನ್ನು ಖಂಡಿಸಿ, ಅದನ್ನು ಹೋಗಲಾಡಿಸಿ ಕಾಪಾಡಲು ತನ್ನ ಇಷ್ಟ ದೇವನಲ್ಲಿ ಮೊರೆ ಇಡುತ್ತಿದ್ದಳು.

ಹೊಸ ತಾರುಣ್ಯದಿಂದ ಹೊಸ ರೂಪ ಧರಿಸಿ ನಿಂತ ಅಕ್ಕನು ಮದುವೆಯಾಗುವದಿಲ್ಲವೆಂಬ ಮಾತು ಊರ ತುಂಬ ಹಬ್ಬಿತ್ತು ! ಅವಳ ಗೆಳತಿಯರು, ಊರ ಸ್ತ್ರೀ ಪುರುಷರು ಅವಳ ಮನದ ನಿರ್ಧಾರ ಕೇಳಿ ಮನಬಂದಂತೆ ಆಡಿಕೊಳ್ಳುತ್ತಿದ್ದರು. ಲೋಕಾಪವಾದಕೆ ಅಂಜುತ್ತ, ಅಳುಕುತ್ತ, ಸುಮತಿ ನಿರ್ಮಲರು ಜೀವಿಸಬೇಕಾಯಿತು.

ಒಂದು ದಿವಸ ಕೆಲವು ಹೆಣ್ಣು ಮಕ್ಕಳು ತಮ್ಮ ತಮ್ಮೊಳಗೆ ಅಕ್ಕನಿಗೆ ಟೀಕಿಸುತ್ತ-ನಿಂದೆ ಮಾಡುತ್ತ ಕುಳಿತಾಗ ಸುಮತಿದೇವಿಯು ಕೇಳಿ, ತಡೆಯದೆ ದುಃಖಿಸಿದಳು ! ನಡೆದ ಘಟನೆಯನ್ನು ಮಗಳಿಗೆ ಹೇಳಿ ಅತ್ತಳು ! ! ಆಗ ಅಕ್ಕನು ತಾಯಿಗೆ ತಾಳ್ಮೆ-ಧೈರ್ಯ ಹೇಳಿದ ರೀತಿ ಎಂತಹ ಪ್ರೌಢಿಮೆಯುಳ್ಳವರಲ್ಲಿಯೂ ತಾಳ್ಮೆಯನ್ನು ಉಂಟು ಮಾಡಬಲ್ಲುದು, ತಾಯಿಗೆ ಅಕ್ಕ ಹೇಳಿದ ಮಾತು;

" ಬೆಟ್ಟದ ಮೇಲೊಂದು ಮನೆಯ ಮಾಡಿ,
ಮೃಗಂಗಳಿಗಂಜಿದಡೆಂತಯ್ಯ !

ಸಮುದ್ರದ ತಡೆಯಲೊಂದು ಮನೆಯ ಮಾಡಿ,
ನೊರೆತೆರೆಗಳಿಗಂಜಿದಡೆಂತಯ್ಯ !
ಸಂತೆಯೊಳಗೊಂದು ಮನೆಯ ಮಾಡಿ,
ಶಬ್ದಕ್ಕೆ ನಾಚಿದಡೆಂತಯ್ಯ !
ಚೆನ್ನಮಲ್ಲಿಕಾರ್ಜುನ ದೇವ ಕೇಳಯ್ಯ;
ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದಡೆ,
ಮನದಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು ! ”

ಭಯಂಕರವಾದ ಅಡವಿಯುಳ್ಳ ಪರ್ವತದಲ್ಲಿ ಕಾಡು ಪ್ರಾಣಿಗಳು ತುಂಬಿಕೊಂಡಿರುತ್ತವೆ. ಅಲ್ಲಿ ನಾವು ಇರಬೇಕಾದಲ್ಲಿ ಆ ಕಾಡು ಪ್ರಾಣಿಗಳಿಗೆ ಅಂಜದೆ ಇರಬೇಕು ! ನೂರಾರು ಸಾವಿರಾರು ಜನರು ಸಂತೆಯಲ್ಲಿ ಗಲಿಬಿಲಿ ಚೀರಾಟ ಮಾಡುವಲ್ಲಿ ಮನೆಯ ಮಾಡಿ ಚೀರಾಟಕ್ಕೆ ಅಂಜಿಕೊಂಡರೆ ಹೇಗೆ ತಾನೇ ಬದುಕಬಹುದು ? ಸಮುದ್ರದ ಪಕ್ಕದಲ್ಲಿ ಜೀವಿಸುವವರು ಸಮುದ್ರದ ತೆರೆಗಳಿಗೆ ಅಂಜಿದರೆ ಅಲ್ಲಿರಲು ಸಾಧ್ಯವೇ ? ಅದರಂತೆ ಸ್ತುತಿ ನಿಂದೆಗಳನ್ನಾಡುವ ಜನರುಳ್ಳ ಈ ಭೂಮಿಯಲ್ಲಿ ಹುಟ್ಟಿ ಬಂದ ನಾವು ತಾಳ್ಮೆ-ಶಾಂತಿಯಿಂದ ಇರಬೇಕೇ ಹೊರತು ಅಂಜಕೂಡದು; ಅಳುಕಬಾರದು. ಈ ರೀತಿಯಾಗಿ ಬಹಳ ಸೊಗಸಾಗಿ ವಿಸ್ತಾರವಾಗಿ ಮನಕ್ಕೆ ಮೆಚ್ಚಿಗೆಯಾಗುವ ಹಾಗೆ ಅಕ್ಕನು ತಾಯಿಗೆ ಹೇಳಿದಳು. ಅಕ್ಕನು ತಾಯಿಗೆ ಹೇಳಿದ ಮಾತು ಮಾನವ ಕೋಟಿಗೆಲ್ಲ ಅನ್ವಯಿಸಿದೆ ! ಲೋಕದಲ್ಲಿ ಜೀವಿಸುವವರಿಗೆಲ್ಲ ಅಕ್ಕನ ಮುತ್ತಿನಂತಹ ಒಂದೇ ಒಂದು ಮಾತು ದೊಡ್ಡ ಬಲವನ್ನು ತಂದು ಕೊಡಬಲ್ಲದು. ಮಗಳ ಮುತ್ತಿನಂತಹ ಮಾತು ಕೇಳಿ ತಾಯಿ ಸುಮತಿಗೆ ತುಂಬಾ ಧೈರ್ಯ ಬಂದಿತು !

ಅಕ್ಕನು ಸಂಸಾರ ಪಾಶದಲ್ಲಿ ಸಿಲುಕದೆ, ಮನದ ವಾಂಛೆಯನ್ನು ಹೋಗಲಾಡಿಸಲು ತನ್ನ ಪ್ರೀತಿಯ ದೇವನಲ್ಲಿ ಪರಿ ಪರಿಯಿಂದ

ಬೇಡುತ್ತ, ಜೀವಿಸುತ್ತಿದ್ದಳು. ಅವಳು ತನ್ನ ದೇವನಲ್ಲಿ ಬೇಡುವ ಪರಿ ಇದು;

"ಎನ್ನ ಮಾಯದ ಮದವ ಮುರಿಯಯ್ಯ !
ಎನ್ನ ಕಾಯದ ಕತ್ತಲೆಯ ಕಳೆಯಯ್ಯ !
ಎನ್ನ ಜೀವದ ಜಂಜಡವ ಮಾಣಿಸಯ್ಯ !
ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯ !
ಎನ್ನ ಸುತ್ತಿದ ಪ್ರಪಂಚವ ಬಿಡಿಸು; ನಿಮ್ಮ ಧರ್ಮ."

ಸಂಸಾರದಲ್ಲಿ ಸಿಲುಕಿ, ಮನ ಬಂದುದ ಬಯಸಿ, ದಾರಿಗೆಡುವನೇ ಮಾಯೆಯನ್ನು ನಂಬಿದವನ ಪಾಡು ! ಮಾಯೆಯು ನಾನಾ ರೀತಿಯಿಂದ ಮಾನವನ ಜೀವನವನ್ನು ಕೆಡಿಸುವದು ! ಅತ್ಯಾಚಾರ, ಕಳವು, ಸುಲಿಗೆ ಮುಂತಾದವುಗಳಿಗೆ ಬಲಿಯಾಗಲು ಮಾಯೆಯೇ ಕಾರಣವಾಗಿದೆ. ಮಾಯೆಯ ಬಂಧನದಿಂದ ಬಿಡುಗಡೆಯಾದವನೇ ವೈರಾಗ್ಯವನ್ನು ಹೊಂದಿದವನಾಗುವನು ! ಕಾಮ, ಕ್ರೋಧ, ಮೋಹ, ಲೋಭ, ಮದ, ಮತ್ಸರವೆಂಬ ಆರು ಮುಖಗಳುಳ್ಳ ಮಾಯೆಯು ಮಾನವನ ಕೋಟೆಯನ್ನು ತನ್ನೆಡೆಗೆ ಸೆಳೆದುಕೊಂಡು ಘಾಸಿಗೊಳಿಸುವದು. ಈ ಆರು ಗುಣಗಳ ಮಹಾ ವೈರಿಯಾದ ಮಾಯೆಯ ಸ್ವರೂಪವನ್ನು ಅಕ್ಕನು ಸ್ವಲ್ಪದರಲ್ಲೇ ರಸ ಪೂರ್ಣವಾಗಿ ಹೇಳಿದ್ದಾಳೆ.

ತರುಣಿಗೆ ಸ್ವಾಭಾವಿಕವಾಗಿ ಆಗುವ ಬಯಕೆಗಳು ಅಕ್ಕನಿಗೂ ಆಗುತ್ತಿದ್ದವು. ಆದರೆ ಅಕ್ಕನು ಆ ಬಯಕೆಗಳಿಗೆ ಮನದಲ್ಲಿ ಸ್ಥಳ ಕೊಡದೆ ಮಾಯೆಯೊಂದಿಗೆ ಬಲವಾಗಿ ಹೋರಾಡುತ್ತಿದ್ದಳು. ತನ್ನನ್ನು ಯಾವ ರೀತಿಯಿಂದ ಮಾಯೆ ಕಾಡಿತೆಂಬುದನ್ನು ಅಕ್ಕನು ಹೇಳಿದ ಮಾತು;

"ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ !
ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ !
ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ !

ನೆನಹಿಂಗೆ ಅರಿವಾಗಿ ಕಾಡಿತ್ತು ಮಾಯೆ !
ಜಗದ ಜಂಗುಳಿಗಳಿಗೆ ಜಂಗೋಲಿನೆತ್ತಿ ಕಾಡಿತ್ತು ಮಾಯೆ !
ಚೆನ್ನಮಲ್ಲಿಕಾರ್ಜುನ ದೇವ,
ನೀನೊಡ್ಡಿದ ಮಾಯೆಯನಾರೂ ಗೆಲಲಾರರು ! "

ಇಂತಹ ಭಯಂಕರವಾದ ಮಾಯೆಯನ್ನು ಜಯಿಸಲು ನಿಂತ ಅಕ್ಕನು ಎಂಥ ತಾಳ್ಮೆಯ ಮೂರ್ತಿ ಇರಬೇಕು ? ತನಗೆ ಮಾಯೆಯನ್ನು ತಂದೊಡ್ಡಿದಾತನು ತನ್ನ ದೇವ ಚೆನ್ನಮಲ್ಲಿಕಾರ್ಜುನನೇ ಎಂದು ಅವಳು ಹೇಳಿದ್ದಾಳೆ. ತನ್ನನ್ನು ಪರೀಕ್ಷಿಸಲು ದೇವನು ಹಾಗೆ ಮಾಡಿದನೆಂದು ಅವಳ ಅಭಿಪ್ರಾಯ.

ಮಾಯೆಯನ್ನು ಜಯಿಸಲು ಸವೆಸುತ್ತಿರುವ ಅಕ್ಕನ ಸಾಧನೆಯ ಜೀವನದಲ್ಲಿ ಒಂದು ದೊಡ್ಡ ಕುತ್ತು ಬಂದಿತು ! ಅದೇನೆಂದರೆ:

ಉಡುತಡಿಯ ಅರಸನಾದ ಕೌಶಿಕ ಮಹಾರಾಜನು ತನ್ನ ಬೇಟೆಯ ಆಟವನ್ನು ಮುಗಿಸಿಕೊಂಡು ವೈಭವದೊಂದಿಗೆ ಪರಿವಾರ ಸಮೇತನಾಗಿ ಊರ ಬೀದಿಯಲ್ಲಿ ಹಾಯ್ದು ಹೋಗುತ್ತಿದ್ದನು. ಅದೇನೆಂದು ಅಕ್ಕನು ಮನೆಯ ಹೊಸ್ತಿಲದಲ್ಲಿ ನಿಂತು ನೋಡುವಾಗ, ಕಾಮುಕನಾದ ಕೌಶಿಕ ದೊರೆಯು ಅಕ್ಕನನ್ನು ಕಂಡು ಮೋಹಿತನಾದನು ! ಅಕ್ಕನ ದಿವ್ಯ ಸೌಂದರ್ಯ ಕಂಡು ಅರಸನು ಬೆಚ್ಚಾದನು ! ‘ ಈ ನಾರಿ ಮಣಿಯು ನನ್ನ ಪಟ್ಟದ ರಾಣಿಯಾಗಬೇಕು ! ಇವಳನ್ನು ಮದುವೆಯಾದರೆ ನನ್ನ ಭಾಗ್ಯಕ್ಕೆ ಎಣೆ ಇಲ್ಲ ! ’ ವೆಂದು ಅರಸನು ಮನದಲ್ಲಿ ನಿಶ್ಚಯಿಸುತ್ತ, ಅರಮನೆ ಸೇರಿದನು.

ಕೌಶಿಕ ರಾಜನ ಸಚಿವರು ನಿರ್ಮಲನ ಮನೆಯಲ್ಲಿ ಕಾಲಿಟ್ಟರು ! ಹಿಂದೆಂದೂ ತನ್ನ ಮನೆಗೆ ಬಾರದ ಸಚಿವರು ಇಂದೇಕೆ ಬಂದರೆಂಬ ಆಶ್ಚರ್ಯ ಹಾಗೂ ಸಂತಸದಿಂದ ನಿರ್ಮಲನು ಸಚಿವರನ್ನು ಅತಿ ಆನಂದದಿಂದ ಬರಮಾಡಿಕೊಂಡನು. ಶಿವ ಭಕ್ತನೂ ಬಡವನೂ ಆದ

ನಿರ್ಮಲನು ಸಚಿವನನ್ನು ಮಣೆಮಂಚದ ಮೇಲೆ ಆದರದಿಂದ ಕೂರಿಸಿ ನಮ್ರನಾಗಿ ಕೇಳಿದನು;

“ಮಹಾನುಭಾವರೇ, ಈ ಬಡವನ ಮನೆಗೆ ತಾವು ಹಿಂದೆಂದೂ ಬಂದಿರಲಿಲ್ಲ! ಇಂದು ಬಂದುದಕ್ಕೆ ನನಗೆ ತುಂಬ ಸಂತೋಷವಾಗಿದೆ! ತಾವು ಬಂದ ಕಾರಣವನ್ನು ದಯವಿಟ್ಟು ತಿಳಿಸುವಿರಾ?” ಎಂದು ವಿನಯದಿಂದ ನಿರ್ಮಲನು ಕೇಳಲು, ಸಚಿವನೊಬ್ಬನು ಮುಗುಳು ನಗುತ್ತ;

“ನಿರ್ಮಲನೇ, ನಿನ್ನ ಭಾಗ್ಯ ತೆರೆಯಿತೆಂದು!” ಎಂದನು. ಮತ್ತೊಬ್ಬ ಸಚಿವನು:

“ರಾಜನ ಮಾವನಾಗುವ ನಿರ್ಮಲ ಸ್ವಾಮಿ ನಮ್ಮನ್ನು ಮರೆಯದಿರಿ!” ಎಂದು ನಕ್ಕನು. ಗಾಬರಿಯಾದ ನಿರ್ಮಲನು ಸಚಿವನ ಮಾತು ಕೇಳಿ ಮತ್ತಷ್ಟು ಕಂಗಾಲುಗೊಂಡು;

“ಸಚಿವರೇ, ತಮ್ಮ ಮಾತಿನ ಅರ್ಥ ವಿಚಿತ್ರವಾಗಿದೆಯಲ್ಲ?” ಎಂದನು. ಸಚಿವರಿಬ್ಬರೂ ನಗುತ್ತ:

“ವಿಚಿತ್ರ ಎಲ್ಲಿಂದ ಬಂತು? ನಿನ್ನ ರೂಪವತಿಯಾದ ಮಗಳ ಮೇಲೆ ನಮ್ಮ ದೊರೆಗೆ ತುಂಬ ಪ್ರೇಮ!” ಎಂದರು.

ನಿರ್ಮಲನ ತಲೆಗೆ ಸಿಡಿಲು ಬಡಿದಂತಾಯಿತು! ಸುಮ್ಮನೆ ಕುಳಿತ!!

“ಅರಸನ ಅಪ್ಪಣೆಯಂತೆ ನಾವಿಲ್ಲಿಗೆ ಬಂದದ್ದು! ಅರಸನಿಗೆ ನಿನ್ನ ಮಗಳನ್ನು ಕೊಟ್ಟು ಮದುವೆ ಮಾಡಿ ಭಾಗ್ಯವಂತನಾಗು!” ಎಂದು ಸಚಿವರಿಬ್ಬರೂ ನಿರ್ಮಲನಿಗೆ ತಿಳಿಸಿದರು.

“ಆ ಭಾಗ್ಯ ನನಗೆ ಬೇಡ!” ಎಂದನು ನಿರ್ಮಲ.

“ಯಾಕೆ ಬೇಡ?” ವೆಂದು ಗುಡುಗಿದರು ಸಚಿವರು.

"ನಾವು ಶೈವರು ! ಪೋರೆಯರು ಜೈನರು ! ಈ ಸಂಬಂಧ ಸಾಧ್ಯವಿಲ್ಲ !" ಎಂದು ಹೇಳಿದನು ನಿರ್ಮಲ.

"ಸಾಧ್ಯವಾಗಲೇಬೇಕು ! ಇದು ರಾಜಾಜ್ಞೆ ! ಮೀರಿದರೆ...!" ಮುಂದೆ ಮಾತನಾಡಲು ನಿರ್ಮಲನಿಗೆ ಧೈರ್ಯವಾಗಲಿಲ್ಲ ! ಚಿಂತೆಯಿಂದ ಮುಖ ಬಾಡಿ ಕುಳಿತನು ! ಅವನಿಗೆ ಸಂಕಟವಾಗುತ್ತಿರುವದನ್ನು ಕಂಡು ಸಚಿವರಿಗೆ ಚೆಲ್ಲಾಟವಾಯಿತು !

"ರಾಜನಿಗೆ ಮಗಳನ್ನು ಕೊಡದಿದ್ದರೆ ನಿನ್ನನ್ನು ಬಂಧಿಸಬೇಕಾಗುವದು ! ತಿಳಿದು ನೋಡು !" ಎಂದು ಸಚಿವರು ನುಡಿದರು. ನಿರ್ಮಲನು ತುಂಬಾ ನೊಂದು ಹೀಗೆಂದನು;

"ನನ್ನ ಮಗಳನ್ನೇ ಕೇಳಿ ಒಪ್ಪಿಸಿರಿ !" ಎಂದನು.

ತಂದೆಯ ಸ್ಥಿತಿಯನ್ನು ಕಂಡು ಅಕ್ಕನ ಎದೆ ಕರಗಿತು ! ಸಚಿವರು ಅಕ್ಕನನ್ನೂ ಕೇಳದೆ ಬಿಡಲಿಲ್ಲ ! ಆಗ ಅಕ್ಕನು ಸಚಿವರಿಗೆ;

"ಮುಡಿ ಬಿಟ್ಟು ಮೋಗ ಬಾಡಿ ತನು ಕರಗಿದವಳ
ಎನ್ನನೇಕೆ ನುಡಿಸುವಿರಿ ಎಲೆ ಅಣ್ಣಗಳಿರಾ ?
ಎನ್ನನೇಕೆ ಕಾಡುವಿರಿ ಎಲೆ ತಂದೆಗಳಿರಾ ?
ಬಲುಹಳಿದು, ಭವಗೆಟ್ಟು, ಛಲವಳಿದು ಭಕ್ತೆಯಾಗಿ,
ಚೆನ್ನಮಲ್ಲಿಕಾರ್ಜುನ ಕೂಡಿ ಕುಲವಳಿದವಳ ?"

ಎಂದು ತನ್ನ ದುಃಖ ಹೇಳಿಕೊಂಡಳು. ಅಕ್ಕನ ದುಃಖಕ್ಕೆ ಸಚಿವರ ಕರುಳು ಕರಗದೆ ಕಲ್ಲಾಯಿತು ! 'ಬೆಕ್ಕಿಗೆ ಚೆಲ್ಲಾಟ ಇಲಿಗೆ ಪ್ರಾಣಸಂಕಟ' ! ಎನ್ನುವಂತಾಯಿತು. ಆಗ ಅಕ್ಕನ ಸ್ಥಿತಿ ರಾಜನ ಅಪ್ಪಣೆಯನ್ನು ನೆರವೇರಿಸಲು ಸಿದ್ಧರಾದ ಸಚಿವರು ಅಕ್ಕನಿಗೆ ರಾಜಾಜ್ಞೆಯನ್ನು ವಿವರಿಸಿ ತಿಳಿಸಿದರು. ಆಗ ಅಕ್ಕನು ಉಭಯ ಸಂಕಟದಲ್ಲಿ ಸಿಕ್ಕು ಬಿದ್ದಳು ! ರಾಜಾಜ್ಞೆಯಂತೆ ಒಪ್ಪಿಕೊಂಡರೆ ತನ್ನ ಜೀವನವೇ ಹಾಳು ! ಒಪ್ಪದಿದ್ದರೆ ತಂದೆ ತಾಯಿಗಳು ಬದುಕುವದು ಕಠಿಣ !

ಇಂಥ ಕುತ್ತನ್ನು ತನ್ನ ಪರೀಕ್ಷೆಗಾಗಿ ಚೆನ್ನಮಲ್ಲಿಕಾರ್ಜುನನು ತಂದೊಡ್ಡಿದನೆಂದು ತಿಳಿದು, ಅದರಿಂದ ಪಾರಾಗುವ ಹಂಚಿಕೆ ಹಾಕಿದಳು. ತನ್ನ ನಿತ್ಯದ ಶಿವಪೂಜೆ, ಶಿವಧ್ಯಾನ, ಪ್ರವಚನಗಳಿಗೆ ಯಾವ ಆತಂಕವೂ ಆಗದಂತೆ ರಾಜನು ನಡೆದರೆ ಮಾತ್ರ ಮದುವೆಗೆ ಒಪ್ಪುವೆನೆಂದೂ, ಆತಂಕವಾದಲ್ಲಿ ಕೂಡಲೆ ಅರಸನಿಂದ ಬಿಡುಗಡೆಯಾಗುವೆನೆಂದೂ ಸಚಿವರಿಗೆ ತಿಳಿಸಿದಳು. ಅಕ್ಕನ ಮನದ ಬಯಕೆಗೆ ಅರಸ ಕೌಶಿಕನು ಒಪ್ಪಿಕೊಂಡನು. ಅಂದಿನಿಂದ ಅಕ್ಕನು ರಾಜನ ಅರಮನೆ ಸೇರಿ, ತನ್ನ ನಿತ್ಯದ ಶಿವಪೂಜೆ, ಶಿವಧ್ಯಾನ, ಪ್ರವಚನದಲ್ಲಿ ನಿರತಳಾದಳು. ಮಗಳು ತಮ್ಮನ್ನು ಗಂಡಾಂತರದಿಂದ ಪಾರು ಮಾಡಿದಳೆಂದು ತಾಯಿ ತಂದೆಗಳು ಹಿಗ್ಗಿದರು.

೫

ಕೌಶಿಕ ದೊರೆಯ ಅರಮನೆಯಲ್ಲಿ ಅಕ್ಕನ ಅತ್ಮ ಪರೀಕ್ಷೆ ನಡೆದಿದೆ! ಅರಸನು ಅಕ್ಕನನ್ನು ತನ್ನ ಬಲೆಯಲ್ಲಿ ಸೆಳೆಯಲು ಬಹು ಪರಿಯಿಂದ ಪ್ರಯತ್ನಿಸುತ್ತಿದ್ದನು. ಅವನನ್ನು ಕಣ್ಣೆತ್ತಿ ನೋಡದೆ ತನ್ನ ಚೆನ್ನಮಲ್ಲಿಕಾರ್ಜುನನನ್ನೇ ನೆನೆಯುತ್ತ, ಅಕ್ಕನು ದಿನಗಳೆಯುತ್ತಿದ್ದಳು. ದಿನಗಳು ಉರುಳಿದಂತೆ ಅರಸನು ಕಾಮವಿಕಾರದಿಂದ ಕಂಗಾಲಾಗಿ ಅಕ್ಕನೊಂದಿಗೆ ಸರಸವಾಡಲು ಹೋಗಿ ಎರಡು ಸಲ ನಿರಾಶೆಗೊಂಡನು. ಮೂರನೆಯ ಬಾರಿ ಅಕ್ಕನ ಮೈ ಮುಟ್ಟಲು ಹವಣಿಸಿದನು! ಆಗ ಅಕ್ಕನು

"ಛೀ, ಪಾಪಿ! ದೂರ ಸರಿ! ಈ ದೇಹ ಆ ಚೆನ್ನಮಲ್ಲಿಕಾರ್ಜುನನಿಗೆ ಮೀಸಲು! ನೀನು ಒಪ್ಪಿಕೊಂಡಂತೆ ನಡೆಯಲಿಲ್ಲ! ನಿನ್ನ ಅರಮನೆಯ ಸಂಗ ಸಾಕು!! ತೆಗೆದುಕೋ ನಿನ್ನ ವಸ್ತ್ರ ಒಡವೆಗಳನ್ನು!!" ಎಂದು ಮೈಮೇಲಿನ ಬಟ್ಟೆ ಬರೆಗಳನ್ನು, ಆಭರಣಗಳನ್ನು ತೆಗೆದು ದೊರೆಯ ಮೇಲೆ ಬೀಸಾಡಿ ಹೊರಬಿದ್ದಳು! ಕೌಶಿಕನಿಗೆ

ಮೂರ್ಛೆ ಬಂದಂತಾಯಿತು ! ತನ್ನ ಕೀಳುತನಕ್ಕೆ ನಾಚಿಕೊಂಡು, ತತ್ತರಿಸುತ್ತ ನೆಲಕೆ ಬಿದ್ದನು !

* * *

ರಾಜನ ಮನೆಯಿಂದ ದಿಗಂಬರೆ ( ಬತ್ತಲೆ ) ಯಾಗಿ ಹೊರ ಬಿದ್ದ ಅಕ್ಕನು ತನ್ನ ತಲೆಗೂದಲಿಂದ ( ಜಡೆಗಳಿಂದ ಅಂಗಾಂಗಗಳನ್ನು ಮುಚ್ಚಿಕೊಂಡು, ಚೆನ್ನಮಲ್ಲಿಕಾರ್ಜುನನನ್ನು ಭಜಿಸುತ್ತ ಉಡುತಡಿ ಗ್ರಾಮದ ಬೀದಿಯಲ್ಲಿ ಹಾಯ್ದು ನಡೆದಳು !

ಊರ ಜನರೆಲ್ಲ ವೈರಾಗ್ಯ ಮೂರ್ತಿ ಅಕ್ಕನನ್ನು ಕಂಡು ಗಾಬರಿಯಾದರು ! ನಾಚಿದರು !! ಮನಸ್ಸಿಗೆ ಬಂದಂತೆ ಅಂದುಕೊಂಡರು ! ಯಾರ ನಿಂದೆಗೂ ಕಿವಿಗೊಡಲಿಲ್ಲ ಅಕ್ಕ ! ಮಗಳ ದಿಂಗಬರತನ ಕಂಡು ನಿರ್ಮಲ–ಸುಮತಿಯರು ಕಣ್ಣೀರು ಸುರಿಸಿದರು !

"ಅವ್ವಾ, ಇದೇನು ಮಗಳೇ ? ಈ ಹರೆಯದಲ್ಲಿ ಹುಚ್ಚಿಯಂತೆ ಬತ್ತಲೆಯಾಗಿ ಎಲ್ಲಿಗೆ ಹೊರಟೆ ತಾಯೀ ನಡೆಯವ್ವಾಃ ....... ? !! "

ಎಂದು ತಾಯಿತಂದೆಗಳು ಕಣ್ಣೀರು ಸುರಿಸಿದರು !

" ನೀವು ದುಃಖಿಸಬೇಡಿರಿ ! ನನಗಾಗಿ ಯಾರೂ ಅಳಬೇಡಿರಿ ! ನನ್ನ ಮನದ ಮೂರ್ತಿ ಚೆನ್ನಮಲ್ಲಿಕಾರ್ಜುನನು ನನ್ನನ್ನು ಕರೆಯುತ್ತಿದ್ದಾನೆ ! ಅವನನ್ನು ಹುಡುಕುತ್ತ ನಾನು ಹೊರಟಿರುವೆ ! " ಎಂದು ಅಕ್ಕನು ನೆರೆದ ಜನಗಳಿಗೆ ತಾಯಿ – ತಂದೆಗಳಿಗೆ ಹೇಳಿದಳು.

" ಅವ್ವಾಃ ಎಂಥ ಹುಚ್ಚಳು ನೀನು ! ಎಲ್ಲಿ ಹೋಗುವೆ ? ಎತ್ತ ಹೋಗುವೆ ? ಮಗಳೇ....... ನಿನ್ನನ್ನು ಕಂಡು ನಮ್ಮ ಈ ಹೃದಯ ಸುಖದಲ್ಲಿತ್ತು ! "

ಎಂದು ಸುಮತಿ ನಿರ್ಮಲರು ಗಳಗಳನೆ ಅತ್ತರು ! ಅಕ್ಕನು ಊರ ಹೊರಗೆ ನಡೆದೇ ಬಿಟ್ಟಳು ! ಅಡ್ಡಗಟ್ಟಿ ತಾಯಿತಂದೆ– ಆಪ್ತ ಬಂಧುಗಳು ಕೇಳಿದರು. ! ಕೈಮುಗಿದು ಹೊರಳಾಡಿ ಅತ್ತರು ! !

" ಎಲ್ಲಿ ಹೋಗುವೆ ? ಎಲ್ಲಿ ಊಟ ಮಾಡುವಿ ? ಎಲ್ಲಿ ವಾಸ ಮಾಡುವಿ ? ಮನೆಗೆ ನಡೆಯವ್ವ......! " ಎಂದರು. ಆಗ ಅಕ್ಕನು ನಿರ್ಧಾರದಿಂದ;

" ಹಸಿವಾದಡೆ ಭಿಕ್ಷಾನ್ನಗಳುಂಟು,
ತೃಷೆಯಾದಡೆ ಕೆರೆ ಹಳ್ಳ ಭಾವಿಗಳುಂಟು.
ಶಯನಕ್ಕೆ ಹಾಳು ದೇಗುಲ ಉಂಟು.
ಚೆನ್ನಮಲ್ಲಿಕಾರ್ಜುನಯ್ಯಾ,
ಆತ್ಮಸಂಗಾತಕ್ಕೆ ನೀನೆನಗುಂಟು ! "

ಉಡುತಡಿಯು ಊರ ಹೊರಗೆ ನಿಂತು ಅಕ್ಕನು ನುಡಿದ ಕೊನೆಯ ಮಾತೇ ಇದು ! ಮುಂದೆ ಅವಳು ಅಲ್ಲಿ ನಿಲ್ಲದೆ ದಾರಿ ಕಂಪೆಡೆಗೆ ತನ್ನ ಮನದ ಮೂರ್ತಿಯನ್ನು ಅರಸುತ್ತ ಸಾಗಿದಳು !

ಹಗಲು ರಾತ್ರಿ ಅನ್ನದೆ, ಕಾಡು ಅಡವಿಗಳನ್ನು ತುಳಿಯುತ್ತ, ಹಸಿವು ನೀರಡಿಕೆಯಿಲ್ಲದೆ ಅಕ್ಕನು ಕಲ್ಯಾಣದತ್ತ ಸಾಗಿದಳು. ದಾರಿಯಲ್ಲಿ ಕಂಡ ಜನರು ಕಂಡ ಕಂಡಂತೆ ಆಡಿದರು. ಕಾಮುಕರು ನಿಂದಿಸಿದರು ! ಹುಚ್ಚಿ ಎಂದರು ! ! ದೆವ್ವ ಅಂದರು ! ! ಅಕ್ಕನ ಇರುವಿಕೆಯನ್ನು, ನಿಜಸ್ಥಿತಿಯನ್ನು, ಅವಳ ವೈರಾಗ್ಯದ ಪರಮಾವಧಿಯನ್ನು ತಿಳಿಯುವದು ಯಾವ ಮಹಾಪುರುಷನಿಗೂ ಅಸಾಧ್ಯವೇ ಸರಿ !

ತನ್ನ ದೇವನನ್ನು ಕಾಣಲು-ಕೂಡಲು ಅಕ್ಕನು ಹಂಬಲಿಸಿ ಬಹಳ ಕಷ್ಟ ಅನುಭವಿಸಿದಳು. ತನಗೆ ಕಷ್ಟಗಳನ್ನು ತಂದೊಡ್ಡಲು ದೇವನಲ್ಲಿ ಬೇಡಿಕೊಳ್ಳುತ್ತಿದ್ದಳು. ನನ್ನ ಪ್ರಿಯ ತಮನಾದ ನಿನ್ನನ್ನು ಕೂಡಲು ನಾನು ಎಂಥ ಕಷ್ಟವನ್ನಾದರೂ ಸಹಿಸಿಕೊಳ್ಳುವೆನೆಂದು ಅವಳು ಹೇಳುವಳು ! ಅವಳು ಕಷ್ಟಕ್ಕೆ ಸ್ವಾಗತ ಬಯಸಿದ ಪರಿ ನಮ್ಮನ್ನು ಬೆರಗು ಗೊಳಿಸುತ್ತದೆ ! ಅದು ಯಾವುದೆಂದರೆ;

" ಮನೆ ಮನೆ ತಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯಾ !
ಬೇಡಿದರೆ ಇಕ್ಕದಂತೆ ಮಾಡಯ್ಯಾ !
ಇಕ್ಕಿದೊಡೆ ನೆಲಕ್ಕೆ ಬೀಳುವಂತೆ ಮಾಡಯ್ಯಾ !
ನೆಲಕ್ಕೆ ಬಿದ್ದೊಡೆ, ನಾನೆತ್ತಿಕೊಂಬ ಮುಂಚೆ,—
ಶುನಿ ಎತ್ತಿಕೊಂಬಂತೆ ಮಾಡಯ್ಯಾ-ಚೆನ್ನಮಲ್ಲಿಕಾರ್ಜುನಯ್ಯಾ "

ಮೇಲಿನ ಅಕ್ಕನ ಮಾತಿನಿಂದ ಅವಳ ಮನದ ತಾಳ್ಮೆ, ಸ್ಥಿ ತೆಗಳು ಯಾವ ರೀತಿಯಲ್ಲಿ, ಎಷ್ಟು ಘನತರವಾದವುಗಳು ಇದ್ದ ವೆಂಬುದು ನಮಗೆ ಸ್ಪಷ್ಟವಾಗಿ ಕಾಣುವವು. ಅವಳ ಅಚಲವಾದ ಸಿದ್ಧಾಂತ, ಅವಳಲ್ಲಿರುವ ಭಕ್ತಿಯ ಒರಿಪೆಗಳು ಇನ್ನಾವ ಸ್ತ್ರೀ ಚರಿತೆಯಲ್ಲಿಯೂ ಕಾಣಲಾರವು.

ಊರೂರು ಅಲೆಯುತ್ತ ಸಾಗಿದ ಅಕ್ಕನನ್ನು ಕಂಡು, ಅವಳ ಅಂಗ ಸೌಂದರ್ಯಕ್ಕೆ ಮೋಹಗೊಂಡು ಕೆಲವರು ಅವಳನ್ನು ಪೀಡಿಸಿ ಬೇಕು ! ಅಂತಹರಲ್ಲಿ ಶರಣನೆಂದು ಹೆಸರಾದ ಕಿನ್ನರಿ ಬೊಮ್ಮಯ್ಯ ನೊಬ್ಬನು ! ಬೊಮ್ಮಯ್ಯನು ಶರಣನಾದರೂ ಅವಳ ರೂಪಿಗೆ ಮರು ಳಾಗಿ, ಮೋಹದಿಂದ ಮಾತನಾಡಿಸಿದನು ! ಅವಳೊಡನೆ ಸರಸವಾ ಡಲು ಆಶಿಸಿದನು. ಕೂಡಲೆ ಅಕ್ಕನು ಚಟ್ಟನೆ ' ಚೆನ್ನಮಲ್ಲಿಕಾರ್ಜುನಾ ! ' ಎಂದು ಚೀರಿ ನೆಲಕುರಿಳಿದಳು ! ಗಾಬರಿಯಾದ ಬೊಮ್ಮಯ್ಯನು ಅಕ್ಕನ ಕೈ ಮುಟ್ಟಲು ! ಕೆಂಡವನ್ನು ಹಿಡಿದಂತಾಗಿ ಅವನ ಕೈ ಸುಟ್ಟಂತಾಯಿತು ! ತನ್ನ ಹೇಯತನಕ್ಕೆ ನಾಚಿ ಅಕ್ಕನ ಪಾದಗಳ ಮೇಲೆ ಬಿದ್ದು ಕ್ಷಮೆ ಬೇಡಿ ಅತ್ತನು ಬೊಮ್ಮಯ್ಯ ! ಅಕ್ಕನು ಬೊಮ್ಮಯ್ಯನಿಗೆ

" ನೋಡುವ ಕಂಗಳಿಗೆ ರೂಪಿಂಬಾಗಿರಲು ನೀವು ಮನ ನಾಚದೆ
ಬಂದಿರಣ್ಣಾ ! ಕೇಳಿದ ಶ್ರೋತ್ರ ಸೊಗಸಿಗೆ ನೀವು ಮರುಳಾಗಿ
ಬಂದಿರಣ್ಣಾ ನಾರಿ ಎಂಬ ರೂಪಿಂಗೆ ನೀವು ಒಲಿದು ಬಂದಿರಣ್ಣಾ
' ಮೂತ್ರವು ಬಿಂದುವೊಸರುವನಾಳ ' ವೆಂದು ಕಂಗಾಣವೆ

ಮಂಡಗೆಟ್ಟು ಬಂದಿರಣ್ಣಾ ! ಬುದ್ಧಿಗೇಡಿತನದಿಂದ,
ಪರಮಾರ್ಥದ ಸುಖವ ಹೋಗಲಾಡಿಸಿಕೊಂಡು,
ಇದಾವ ಕಾಣಾಪೆಂದರಿಯದೆ, ಸೀಸ್ಪ, ನರಕಕೇತು -
ವೆಂದರಿಯದೆ ಮನ ನೋಸದೆ ಬಂದಿರಣ್ಣಾ !
ಚೆನ್ನಮಲ್ಲಿಕಾರ್ಜುನನಲ್ಲದೆ ಹುಟ್ಟಿದ [illegible]ಗೆ —
ಸಹೋದರ ! ಛೀ, ಹೋಗಾ ಮರುಳೆ ! "

ಎಂದು ಛೀ ಮಾಡಿದಳು. ಶರಣ ಬೊಮ್ಮಯ್ಯನು ಅಕ್ಕನ ಮಾತಿಗೆ ಮನಸಾರೆ ವಂದಿಸಿ;

" ಕ್ಷಮಿಸು ತಾಯಿ ! ಈ ಪಾಪಿಯನ್ನು ಉದ್ಧರಿಸು !! "
ಎಂದು ಬೇಡಿಕೊಂಡನು.

" ಅಣ್ಣ, ಹದಿನಾಲ್ಕು ಲೋಕಂಗಳನ್ನು ಸುಟ್ಟ ಈ ಮಾಯೆಯ ಸ್ವರೂಪ ಬಹು ಭೀಕರವಾದದ್ದು ! ನಿನ್ನ ನನ್ನವರೇ ಅಣ್ಣಾ ? ಪರಮಾರ್ಥದ ಸುಖ ಬಿಟ್ಟು ಬಯಲಾಸೆಗೆ ಬಾಯಿದೆರೆಯದಿರು ! " ಎಂದು ಅಕ್ಕನು ಬೊಮ್ಮಯ್ಯನಿಗೆ ಆಶೀರ್ವದಿಸಿದಳು. ಅಕ್ಕನ ದಯೆಯಿಂದ ಆ ಶರಣನ ಜೀವನ ಪಾವನವಾಯಿತು.

ಕಲ್ಯಾಣದ ಪುಣ್ಯಕ್ಷೇತ್ರದಲ್ಲಿ ಬಸವ, ಅಲ್ಲಮಪ್ರಭು, ಸಿದ್ಧರಾಮ, ಚೆನ್ನಬಸವಣ್ಣ ಮೊದಲಾದ ಮಹಾಪುರುಷರು ನೆರೆದಿದ್ದಾರೆ. ಶಿವನ ಭಕ್ತರಾದ ಶರಣರ ಬಳಗ ಸಾಗರದಂತೆ ಕೂಡಿದೆ. ' ಅನುಭವ ಮಂಟಪ ' ದಲ್ಲಿ ಎಲ್ಲರೂ ಪಾರಮಾರ್ಥದ ವಿಷಯಗಳನ್ನು ಚರ್ಚೆ ಮಾಡುತ್ತ, ಮಾನವ ಕೋಟಿಯ ಜಂಜಡ ದೂರ ಮಾಡಲು ಉಚ್ಚ ವಿಚಾರಗಳನ್ನು ಆಚರಣೆಯಲ್ಲಿ ತರುತ್ತಿದ್ದಾರೆ. ದಿಗಂಬರೆಯಾದ ಅಕ್ಕ ಮಹಾದೇವಿಯು ಶರಣರ ಬಳಗದಲ್ಲಿ ಭಾಗಿಯಾಗಲು ಬಸವ, ಅಲ್ಲಮ ಪ್ರಭುಗಳನ್ನು ಕಾಣಲು ಕಲ್ಯಾಣ ಪಟ್ಟಣಕ್ಕೆ ಬಂದಿದ್ದಾಳೆ.

ವೈರಾಗ್ಯವೇ ರೂಪ ತಾಳಿ ಬಂದಂತಿರುವ ಅಕ್ಕನನ್ನು ಕಂಡು ಮಹಾನುಭಾವರಾದ ಬಸವಣ್ಣನವರು ಹರುಷಭರಿತರಾಗುವರು. ಜ್ಞಾನ ಯೋಗಿಗಳಾದ ಪ್ರಭು ದೇವರು ಅಕ್ಕನೊಂದಿಗೆ ಅಧ್ಯಾತ್ಮ ವಿಷಯ ಚರ್ಚಿಸಿ, ಅವಳ ಉಚ್ಚ ಮತಗಳಿಗೆ - ವಿಚಾರಗಳಿಗೆ ಒಪ್ಪಿ ಕೊಂಡು ಅನುಭವ ಮಂಟಪದಲ್ಲಿ ಅವಳಿಗೆ ಒಳ್ಳೆಯ ಸ್ಥಾನ ಕೊಡು ವರು. ಆ ಸ್ಥಾನದಲ್ಲಿ ಅಕ್ಕನು ದಿನಗಳೆಯದೆ ಚೆನ್ನಮಲ್ಲಿಕಾರ್ಜುನ ನನ್ನು ಕಾಣಲು ಶ್ರೀಶೈಲ ಕ್ಷೇತ್ರದ ಕಡೆಗೆ ತೆರಳುವಳು ! ಶರಣ ರೆಲ್ಲರೂ ಅಕ್ಕನನ್ನು ಬೀಳ್ಕೊಡುವರು.

೭

ಶ್ರೀಶೈಲ ನಿವಾಸಿಯಾದ ಚೆನ್ನಮಲ್ಲಿಕಾರ್ಜುನನನ್ನು ಅಕ್ಕನು ಬನ ಬನಗಳಲ್ಲಿ, ಗಿಡ ಗಿಡಗಳಲ್ಲಿ ಅರಸುತ್ತ, ಅವನಿಗಾಗಿ ಹಂಬಲಿ ಸುತ್ತ ಅಲೆಯುವಳು. ಎಲ್ಲೆಲ್ಲಿಯೂ ತನ್ನ ದೇವನ ರೂಪವನ್ನೇ ಕಾಣು ವಳು. ಆಗ ಅಕ್ಕನು;

"ವನವೆಲ್ಲ ನೀವೇ, ವನದೊಳಗಣ ದೇವ ತರುವೆಲ್ಲ ನೀವೇ,
ತರುವಿನೊಳಗಾಡುವ ಖಗಮೃಗವೆಲ್ಲ ನೀವೇ
ಚೆನ್ನಮಲ್ಲಿಕಾರ್ಜುನ ಸರ್ವಭರಿತನಾಗಿ,
ಎನಗೆ ಮುಖ ದೋರಾ !"

ಮತ್ತೂ ಅಕ್ಕನು ಹಲುಬುತ್ತ ತನ್ನ ಎದೆಯಾಣ್ಮನನ್ನು ಕೂಗಿ ಕೂಗಿ ಕರೆದು, ಪಶುಪಕ್ಷಿ, ಗಿಡಮರ, ಹಕ್ಕಿ ಪಕ್ಕಿಗಳನ್ನು ಕೇಳುವಳು;

"ಚಿಲಿ ಪಿಲಿ ಎಂದೋದರುವ ಗಿಳಿಗಳಿರಾ, ನೀವು ಕಾಣಿರೆ,
ಸರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೆ,
ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೆ,
ಕೊಳತಳಿಯೊಳಾಡುವ ಹಂಸೆಗಳಿರಾ, ನೀವು ಕಾಣಿರೆ,

ಗಿರಿಗಹ್ವರದೊಳಾಡುವಾ ನವಿಲುಗಳಿರಾ, ನೀವು ಕಾಣಿರೆ,
ಚೆನ್ನಮಲ್ಲಿಕಾರ್ಜುನನೆಲ್ಲಿರ್ದಹನೆಂದು, ನೀವು ಹೇಳಿರೆ. ”

ಅಕ್ಕನ ಹಲುಬುವಿಕೆಯನ್ನು ಕಂಡು, ಅವಳ ಕಣ್ಣೀರನ್ನು ಕಂಡು ಯಾರ ಎದೆ ತಾನೇ ಕರಗದೆ ಇದ್ದೀತು ! ಗಿರಿಯನು ಏರಿ ಅಕ್ಕ ನಿಂತಿದ್ದಾಳೆ ! ‘ ಬೆರಸುವರೆ ಬೇಗ ತೋರಾ, ಹೊರ ತಾಕದಿರಯ್ಯಾ ! ’ ಎಂದು ಅಕ್ಕನು ಕೊನೆಯದಾಗಿ ದೇವನನ್ನು ಕೂಗಿ ಕರೆಯುವಳು. ಅಕ್ಕನ ಪ್ರಾರ್ಥನೆ ಸಾರ್ಥಕವಾಯಿತು. ತನ್ನ ಅವ್ಯಕ್ತ ಹಸ್ತದಿಂದ ಚಿನ್ಮಯನಾದ ಚೆನ್ನಮಲ್ಲಿಕಾರ್ಜುನನು ಅಕ್ಕನನ್ನು ಬರಸೆಳೆದು ಕೊಂಡನು, ಅವಳೊಂದಿಗೆ ಮಾಯವಾದನು.

ಕನ್ನಡ ನಾಡಿನ ಪುಣ್ಯ ಭೂಮಿಯಲ್ಲಿ ಜನಿಸಿದ ಅಕ್ಕನು ಮರೆಯಾಗಿ ಏಳು ನೂರು ವರುಷಗಳು ಉರುಳಿದರೂ ಅವಳ ಜೀವನ ಚಿತ್ರ, ಅವಳ ವೈರಾಗ್ಯದ ರೂಪ ನಮ್ಮ ಮುಂದೆ ಇಂದಿಗೂ ಕಾದು ನಿಂತಿದೆ ! ಅವಳ ಪಾವನಮಯ ಜೀವನವನ್ನು ಅರಿತು ನಮ್ಮ ಜೀವನವನ್ನು ಪವಿತ್ರಗೊಳಿಸೋಣ.